## ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿನ ಪ್ರಶ್ನೆ : 292

ಸದಸ್ಯರ ಹೆಸರು : ಡಾ. ವೈ. ಎ. ನಾರಾಯಣಸ್ವಾಮಿ (ಶಿಕ್ಷಕರ ಕ್ಷೇತ್ರ)

ಉತ್ತರಿಸುವ ದಿನಾಂಕ : 16/07/2019.

ಉತ್ತರಿಸಬೇಕಾದ ಸಚಿವರು : ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಚಿವರು.

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಅನುದಾನಿತ ಶಾಲಾ ಕಾಲೇಜುಗಳ ಬೋಧಕ ಮತ್ತು ಬೋಧಕೇತರ ಸಿಬ್ಬಂದಿಯವರಿಗೆ ಕಾಲ್ಪನಿಕ ವೇತನ ಬಡ್ತಿ ನೀಡದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ. |
| ಆ) | ಬಂದಿದ್ದಲ್ಲಿ, ಇದುವರೆವಿಗೂ ಈ ಬಡ್ತಿಯನ್ನು ನೀಡದಿರಲು ಇರುವ ಸಕಾರಣಗಳೇನು; ಹಾಗೂ ಈ ಬಡ್ತಿಯಿಂದ ಸರ್ಕಾರದ ಬೊಕ್ಕಸಕ್ಕೆ ಆಗುವ ನಿಖರವಾದ ವೆಚ್ಚ ಎಷ್ಟು; | ಅನುದಾನ ಸಂಹಿತೆಯ ಪ್ರಕಾರ ಅನುದಾನಕ್ಕೊಳಪಟ್ಟ ಸಿಬ್ಬಂದಿಗೆ ಅನುದಾನ ದೊರೆತ ದಿನಾಂಕದಿಂದ ಮಾತ್ರ ಕನಿಷ್ಠ ವೇತನ ನಿಗದಿ ಮಾಡಬೇಕಿದ್ದು, ಹಿಂದಿನ ಸೇವಾವಧಿಯನ್ನು ಯಾವುದೇ ಸೇವಾ ಸೌಲಭ್ಯಕ್ಕೆ ಪರಿಗಣಿಸುವಂತಿಲ್ಲ ಈ ಸಂಬಂಧ ಸರ್ಕಾರವು ದಿನಾಂಕ : 01/06/1995ರಿಂದಲೇ ಪೂರ್ವಾನ್ವಯವಾಗಿ ಜಾರಿಗೆ ಬರುವಂತೆ ಕರ್ನಾಟಕ ಖಾಸಗಿ ಅನುದಾನಿತ ಶೈಕ್ಷಣಿಕ ಸಂಸ್ಥೆಗಳ ಸಿಬ್ಬಂದಿಗಳ (ವೇತನ, ನಿವೃತ್ತಿ ವೇತನ ಮತ್ತು ಇತರೆ ಸೌಲಭ್ಯಗಳ ನಿಯಂತ್ರಣ) ಅಧಿನಿಯಮ 2014ನ್ನು ರೂಪಿಸಲಾಗಿದೆ.<br><br>ಈ ಅಧಿನಿಯಮವನ್ನು ಅನುದಾನಿತ ಶಿಕ್ಷಣ ಸಂಸ್ಥೆಗಳ ಸಿಬ್ಬಂದಿಗಳು ಪ್ರಶ್ನಿಸಿರುವ ರಿಟ್ ಅರ್ಜಿಗಳಾದ 21216/2014 ಮತ್ತು 14307/2014 ಮತ್ತು ತತ್ಸಂಬಂಧದ ಪ್ರಕರಣಗಳಲ್ಲಿ ಉಚ್ಚ ನ್ಯಾಯಾಲಯವು ದಿನಾಂಕ : 10/07/2015ರಂದು ನೀಡಿದ ತೀರ್ಪಿನಲ್ಲಿ ಸದರಿ ಅಧಿನಿಯಮವನ್ನು "struck down" ಮಾಡಿರುತ್ತದೆ.<br><br>ಅನುದಾನಿತ ಶಿಕ್ಷಣ ಸಂಸ್ಥೆಗಳ ಅನುದಾನರಹಿತ ಸೇವಾವಧಿಯನ್ನು ಪರಿಗಣಿಸಿದಲ್ಲಿ ಆಗಬಹುದಾದ ಅಂದಾಜು ಆರ್ಥಿಕ ವೆಚ್ಚದ ಮಾಹಿತಿಯನ್ನು ಅನುಬಂಧ-1ರಲ್ಲಿರಿಸಿದೆ.<br><br>ಮೇಲಿನ ಮಾನ್ಯ ನ್ಯಾಯಾಲಯದ ತೀರ್ಪನ್ನು ಪ್ರಶ್ನಿಸಿ ಸರ್ಕಾರವು ಮಾನ್ಯ ಉಚ್ಚ ನ್ಯಾಯಾಲಯ, ಬೆಂಗಳೂರು, ಇಲ್ಲಿ ರಿಟ್ ಅಪೀಲು ಸಂಖ್ಯೆ : 2476/2015 ಮತ್ತು 2467/2015ನ್ನು ದಾಖಲಿಸಿದೆ. ಮೇಲಿನ ರಿಟ್ ಅರ್ಜಿಗಳಲ್ಲಿ ನೀಡಿದ ತೀರ್ಪಿಗೆ ದಿನಾಂಕ : 27/11/2015ರಂದು ತಡೆಯಾಜ್ಞೆ ಪಡೆಯಲಾಗಿದೆ. ತಡೆಯಾಜ್ಞೆ ಪ್ರಸ್ತುತವು ಜಾರಿಯಲ್ಲಿದ್ದು, ಪ್ರಕರಣವು ನ್ಯಾಯಾಲಯದಲ್ಲಿ ಇನ್ನೂ ಬಾಕಿಯಿರುತ್ತದೆ. |
| ಇ) | ಯಾವ ಕಾಲಮಿತಿಯೊಳಗೆ ಕಾಲ್ಪನಿಕ ವೇತನ ಬಡ್ತಿಯನ್ನು ನೀಡಲಾಗುವುದು? (ಮಾಹಿತಿ ನೀಡುವುದು). | |

ಸಂಖ್ಯೆ: ಇಡಿ 69 ಎಸ್ಇಎಸ್ 2019)

(ಎಸ್. ಆರ್. ಶ್ರೀನಿವಾಸ್).
ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಚಿವರು.

**ಮಾನ್ಯ ಕರ್ನಾಟಕ ಉಚ್ಛ ನ್ಯಾಯಾಲಯಕ್ಕೆ ರಿಟ್ ಅಪೀಲು ಸಂಖ್ಯೆ : 2476/2015ರಲ್ಲಿ ಅನುದಾನಿತ ಶಿಕ್ಷಣ ಸಂಸ್ಥೆಗಳ ಅನುದಾನರಹಿತ ಸೇವಾವಧಿಯನ್ನು ಪರಿಗಣಿಸಿದಲ್ಲಿ ಆಗಬಹುದಾದ ಅಂದಾಜು ಆರ್ಥಿಕ ವೆಚ್ಚದ ಮಾಹಿತಿಯನ್ನು ಈ ಕೆಳಗಿನಂತೆ ಸಲ್ಲಿಸಲಾಗಿದೆ**

ಅನುಬಂಧ-1

| Department | No. of Institutions | No. of staffs | | Total staffs | Amount of burden on the state exchequer (Rs. In crores) | | | Total (Rs.) |
|---|---|---|---|---|---|---|---|---|
| | | Teaching | Non-Teaching | | Additional salary required per year on notional fixation (Rs.) | Arrears (Rs.) | Pension (Rs.) | |
| PRIMARY | 1704 | 8058 | - | 8058 | 72.25 | 612.11 | 302.18 | 986.54 |
| SECONDARY | 2323 | 12064 | 2443 | 14507 | 141.58 | 1276.39 | 766.26 | 2184.23 |
| P.U | 717 | 4280 | 1468 | 5748 | 91.35 | 511.10 | 305.74 | 908.19 |
| Collegiate | 108 | 855 | 878 | 1733 | 38.52 | 447.22 | 147.76 | 633.50 |
| Technical | 47 | 1033 | 1894 | 2927 | 16.16 | 236.72 | 115.67 | 368.55 |
| Total | 4899 | 26290 | 6683 | 32973 | 359.86 | 3083.54 | 1637.61 | 5081.01 |